ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಕರ್ನಾಟಕ ಲೋಕಸೇವಾ ಆಯೋಗದಲ್ಲಿನ ಹೊರಗುತ್ತಿಗೆ ನೌಕರರ ಬಗ್ಗೆ

ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) :-

684 (1009) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ "ರಾಜ್ಯ ಸರ್ಕಾರದ" ಹಲವಾರು ಇಲಾಖೆಗೆ ನೇಮಕಾತಿ ಮಾಡುತ್ತಿದ್ದು ಸಂವಿಧಾನಿಕ ಸಂಸ್ಥೆಯಾದ ಸದರಿ ಲೋಕಸೇವಾ ಆಯೋಗದಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕೆಲವು ಹುದ್ದೆಗಳಿಗೆ ನೌಕರರನ್ನು ನೇಮಕ ಮಾಡಿಕೊಂಡು ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ;

(ಆ) ಈ ರೀತಿ ಬೇರೆ ಇಲಾಖೆಗೆ/ಸ್ವಾಯತ್ತ ಸಂಸ್ಥೆಗಳಿಗೆ ನೇಮಕಾತಿ ಮಾಡಿಕೊಡುವ ಸಂವಿಧಾನದ ಸಂಸ್ಥೆಗೆ ಖಾಲಿಯಿರುವ ಹುದ್ದೆಗೆ ಖಾಯಂ ನೌಕರರನ್ನು ನೇಮಕಾತಿ ಮಾಡಿಕೊಳ್ಳುವ ಸಾಮರ್ಥ್ಯವಿಲ್ಲವೇ;

(ಇ) ಹೊರಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ನೌಕರರ ಚಟುವಟಿಕೆಗಳ ಮೇಲೆ ಆಯೋಗವು ನಿಯಂತ್ರಣ ಹೊಂದಿದೆಯೇ;

(ಈ) ಕೆ.ಪಿ.ಎಸ್.ಸಿ ಯಲ್ಲಿ ಪ್ರಸ್ತುತ ಖಾಲಿ ಇರುವ ಹುದ್ದೆವಾರು, ವರ್ಗವಾರು ಎ.ಬಿ.ಸಿ.ಡಿ ಹುದ್ದೆಗಳ ಮಾಹಿತಿ ನೀಡುವುದು;

(ಉ) ಕೆ.ಪಿ.ಎಸ್.ಸಿ ನೇಮಿಸಿಕೊಂಡ ಹೊರಗುತ್ತಿಗೆ ನೌಕರರನ್ನು ಖಾಲಿ ಇರುವ ಹುದ್ದೆಗಳಿಗೆ ಎದುರಾಗಿ ನೇಮಿಸಿಕೊಳ್ಳಲಾಗಿದೆಯೇ ಹಾಗೂ ಸದರಿ ಸಂಸ್ಥೆಯಲ್ಲಿ ಪ್ರಸ್ತುತ ಎಷ್ಟು ಹೊರಗುತ್ತಿಗೆ ನೌಕರರನ್ನು ನೇಮಿಸಿಕೊಳ್ಳಲಾಗಿದೆ; ಹುದ್ದೆವಾರು ಹೆಸರು ಸಹಿತ ಮಾಹಿತಿ ನೀಡುವುದು;

(ಊ) ಕೆ.ಪಿ.ಎಸ್.ಸಿ ಯಲ್ಲಿ ಕಾರ್ಯನಿರ್ವಹಿಸುತ್ತಿರುವ ಹೊರಗುತ್ತಿಗೆ ನೌಕರರ ಮಾನ್ಯ ಸದಸ್ಯರ ಹೆಸರುಗಳನ್ನು ಬಳಸಿಕೊಂಡು ನೇಮಕಾತಿ ದಂದೆಯಲ್ಲಿ ತೊಡಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅಂತಹ ಚಟುವಟಿಕೆ ತಡೆಯಲು ಸರ್ಕಾರವು ಕೈಗೊಂಡ ಕ್ರಮಗಳೇನು ?